ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 16ನೇ ಮಾರ್ಚ್, 2020

ಕಾರ್ಮಿಕ ಇಲಾಖೆಯಲ್ಲಿ ಸಹಾಯಕ ಹಸ್ತ ಕಾಯಕ ಬಂಧು ಯೋಜನೆಯ ಬಗ್ಗೆ

ಶ್ರೀ ಆರ್.ಚೌಡರೆಡ್ಡಿ ತೂಪಲ್ಲಿ (ಪದವೀಧರರ ಕ್ಷೇತ್ರ):-

1020 (1225) ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ ಸಾರ್ವಜನಿಕ ನಿಗಮಗಳು/ಕಂಪನಿಗಳು, ಶಾಸನಬದ್ಧ ಮಂಡಳಿಗಳು, ಉದ್ದಿಮೆಗಳು, ಅಂಗ ಸಂಸ್ಥೆಗಳು, ಮತ್ತು ಸೊಸೈಟಿಗಳು ಹಾಗೂ ಇತರೆ ಎಷ್ಟಿವೆ ; ಯಾವುವು ; (ವಿವರವಾಗಿ ಇಲಾಖಾವಾರು, ಕೇಂದ್ರ ಕಛೇರಿ, ವಿಳಾಸ ಹಾಗೂ ದೂರವಾಣಿ ಸಂಖ್ಯೆಗಳನ್ನು ಒಳಗೊಂಡಂತೆ ವಿವರವಾದ ಮಾಹಿತಿ ನೀಡುವುದು)

(ಆ) ಸದರಿ ಇಲಾಖೆಯಡಿ ಹಾಲಿ ಜಾರಿಯಲ್ಲಿರುವ ಯೋಜನೆಗಳಾವುವು; (ಯೋಜನಾವಾರು ವಿವರವಾದ ಮಾಹಿತಿ ನೀಡುವುದು)

(ಇ) ಕಾರ್ಮಿಕ ಇಲಾಖೆಯ ಅಧೀನದಲ್ಲಿ ಎಷ್ಟು ಕಾರ್ಮಿಕ ನಿಧಿ ಹಣವಿದೆ; ಇದನ್ನು ಖರ್ಚು ಮಾಡಲು ಇರುವ ಮಾರ್ಗಸೂಚಿಗಳಾವುವು ; ಇಲ್ಲಿಯವರೆಗೆ ಎಷ್ಟು ಹಣ ಖರ್ಚು ಮಾಡಲಾಗಿದೆ ಹಾಗೂ ಉಳಿದಿರುವ ಹಣವೆಷ್ಟು ;

(ಈ) ಕಾರ್ಮಿಕ ಸಹಾಯ ಹಸ್ತ `ಕಾಯಕ ಬಂಧು' ಯೋಜನೆ ಜಾರಿಯಲ್ಲಿದೆಯೇ ; ಇದರ ರೂಪು ರೇಷೆಗಳೇನು ; ಇದರ ಸಂಬಂಧ ಎಷ್ಟು ಜನರನ್ನು ನೇಮಕ ಮಾಡಿಕೊಳ್ಳಲಾಗಿದೆ ; ತುಮಕೂರು ಜಿಲ್ಲೆಯಲ್ಲಿ ಈ ಯೋಜನೆಗೆ ನೇಮಕ ಮಾಡಿಕೊಂಡಿರುವವರ ಹೆಸರು, ವಿಳಾಸದೊಂದಿಗೆ ತಾಲ್ಲೂಕುವಾರು ಮಾಹಿತಿ ನೀಡುವುದು ;

(ಉ) ಇವರಿಗೆ ಸರ್ಕಾರವು ನೀಡುತ್ತಿರುವ ಸಹಾಯ/ಪ್ರೋತ್ಸಾಹ ಧನವೆಷ್ಟು?